# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ನಾಲ್ಕನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಶುಕ್ರವಾರ, ದಿನಾಂಕ 11ನೇ ಜುಲೈ, 2014
(ಸಮಯ: ಬೆಳಗ್ಗೆ 10.00 ಗಂಟೆಗೆ)

-----

## 1. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಹದಿನೈದನೇ ಪಟ್ಟಿ

ಆ) (i) ದಿನಾಂಕ 10.07.2014ರ ಹದಿನಾಲ್ಕನೇ ಪಟ್ಟಿಯಿಂದ ತಡೆಹಿಡಿಯಲಾದ ಶ್ರೀ ಎಸ್. ಚಿಕ್ಕಮಾದು ಅವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 197(2640) : ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

(ii) ದಿನಾಂಕ 10.07.2014ರ ಹದಿನಾಲ್ಕನೇ ಪಟ್ಟಿಯಿಂದ ತಡೆಹಿಡಿಯಲಾದ ಶ್ರೀ ಪಿ.ಆರ್.ಸುಧಾಕರ ಲಾಲ್ ಅವರ ಗುರುತಿನ ಪ್ರಶ್ನೆ ಸಂಖ್ಯೆ: 200(2836) : ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

(iii) ದಿನಾಂಕ 10.07.2014ರ ಹದಿನಾಲ್ಕನೇ ಪಟ್ಟಿಯಿಂದ ತಡೆಹಿಡಿಯಲಾದ ಶ್ರೀಮತಿ ಶಾರದಾ ಮೋಹನ ಶೆಟ್ಟಿ ಅವರ ಗುರುತಿನ ಪ್ರಶ್ನೆ ಸಂಖ್ಯೆ: 210(2851) : ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

ಇ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಹದಿನೈದನೇ ಪಟ್ಟಿ

## 2. ವರದಿಗಳನ್ನೊಪ್ಪಿಸುವುದು

ಶ್ರೀಮತಿ ಶಕುಂತಲಾ ಟಿ. ಶೆಟ್ಟಿ (ಅಧ್ಯಕ್ಷರು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಮಿತಿ) ಅವರು 2013-14ನೇ ಸಾಲಿನ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಮಿತಿಯ ಇಪ್ಪತ್ತೇಳು ಮತ್ತು ಇಪ್ಪತ್ತೆಂಟನೇ ವರದಿಗಳನ್ನೊಪ್ಪಿಸುವುದು.

ಮು.ತಿ.ನೋ.,

## 3. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. ಶ್ರೀಯುತರುಗಳಾದ ಜಗದೀಶ್ ಶೆಟ್ಟರ, ಆರ್. ಅಶೋಕ್, ವಿಶ್ವೇಶ್ವರ ಹೆಗಡೆ ಕಾಗೇರಿ, ಬಸವರಾಜ ಬೊಮ್ಮಾಯಿ ಮತ್ತು ಗೋವಿಂದ ಎಂ.ಕಾರಜೋಳ ಹಾಗೂ ಇತರರು ಸಕಾಲದಲ್ಲಿ ಮಳೆ ಬಾರದೇ ರಾಜ್ಯದ ಹಲವು ಜಿಲ್ಲೆಗಳಲ್ಲಿ ಬರಗಾಲ ಆವರಿಸುತ್ತಿರುವ ಹಿನ್ನಲೆಯಲ್ಲಿ ರಾಜ್ಯ ಸರ್ಕಾರ ಕೈಗೊಳ್ಳಬೇಕಾಗಿದ್ದ ಮುಂಜಾಗ್ರತೆ ಕ್ರಮಗಳನ್ನು ಈವರೆಗೆ ಕೈಗೊಳ್ಳದಿರುವ ಬಗ್ಗೆ ಚರ್ಚೆ.

ಮತ್ತು

ಶ್ರೀಯುತರುಗಳಾದ ಬಿ.ಆರ್.ಪಾಟೀಲ್, ಹೆಚ್.ಕೆ. ಕುಮಾರಸ್ವಾಮಿ, ಕೆ.ಎಸ್. ಪುಟ್ಟಣ್ಣಯ್ಯ ಮತ್ತು ಎಸ್. ಚಿಕ್ಕಮಾದು ಅವರುಗಳು ರಾಜ್ಯದ 124 ತಾಲ್ಲೂಕುಗಳಲ್ಲಿ ಬರಗಾಲದಿಂದ ಕೃಷಿ ಕಾರ್ಮಿಕರು ಗುಳೆ ಹೋಗುತ್ತಿದ್ದು ಮತ್ತು ಜಾನುವಾರುಗಳಿಗೆ ಮೇವು ಇಲ್ಲದೆ ತೊಂದರೆಯಾಗುತ್ತಿರುವ ಬಗ್ಗೆ ಚರ್ಚೆ.

## 4. ವಿತ್ತೀಯ ಕಾರ್ಯಕಲಾಪಗಳು

2014-15ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಯ ಮೇಲೆ ಮುಂದುವರೆದ ಚರ್ಚೆ,

| <u>ಬೇಡಿಕೆ ಸಂಖ್ಯೆ</u> | <u>ಬೇಡಿಕೆಯ ಹೆಸರು</u> |
|---|---|
| 24 | ಇಂಧನ |

## 5. ಗಮನ ಸೆಳೆಯುವ ಸೂಚನೆಗಳು

1. ಶ್ರೀ ಎಂ. ಕೃಷ್ಣಾರೆಡ್ಡಿ ಅವರು ಚಿಂತಾಮಣಿ ಸಾರ್ವಜನಿಕ ಆಸ್ಪತ್ರೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ವೈದ್ಯಾಧಿಕಾರಿಗಳ ಕರ್ತವ್ಯ ಲೋಪದಿಂದ ಗರ್ಭಿಣಿಯೊಬ್ಬರು ಮೃತಪಟ್ಟಿದ್ದು ಸರ್ಕಾರದಿಂದ ಪರಿಹಾರ ನೀಡುವ ಹಾಗೂ ಸಂಬಂಧಪಟ್ಟ ವೈದ್ಯರ ಮೇಲೆ ಕ್ರಮಕೈಗೊಳ್ಳುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.

2. ಶ್ರೀ ಸಿ.ಎನ್. ಬಾಲಕೃಷ್ಣ ಅವರು ಶ್ರವಣಬೆಳಗೊಳ ಕ್ಷೇತ್ರ ವ್ಯಾಪ್ತಿಯ ನುಗ್ಗೇಹಳ್ಳಿಯಲ್ಲಿ ಮೊರಾರ್ಜಿದೇಸಾಯಿ ವಸತಿ ಶಾಲೆಯನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡಿದ್ದರೂ ಸಹ ಕಟ್ಟಡ ನಿರ್ಮಾಣ ಮಾಡದಿರುವುದರಿಂದ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿರುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

**ಮು.ತಿ.ನೋ.,**

3. ಶ್ರೀ ಎಸ್. ಭೀಮಾ ನಾಯ್ಕ ಅವರು ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಗ್ರಾಮೀಣ ಪ್ರದೇಶಗಳ ಕುಡಿಯುವ ನೀರಿಗಾಗಿ ತುಂಗಾಭದ್ರಾ ಜಲಾಶಯದಿಂದ ಮಾಲವಿ ಜಲಾಶಯಕ್ಕೆ ನೀರನ್ನು ಹರಿಸುವ ಬಗ್ಗೆ ಮಾನ್ಯ ಭಾರೀ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

4. ಶ್ರೀ ಸಾ.ರಾ. ಮಹೇಶ್ ಮತ್ತು ಶ್ರೀ ಎಸ್. ಚಿಕ್ಕಮಾದು ಅವರುಗಳು ಮೈಸೂರು ಜಿಲ್ಲೆಯ ಕೃಷ್ಣರಾಜನಗರದ ಮೂಲೆಪೆಟ್ಟಲು ಗ್ರಾಮದಿಂದ ಹೊಸಕೋಟೆ- ಗುಂಗ್ರಾಲಛತ್ರ ಮುಖಾಂತರ ಮೈಸೂರು ತಲುಪುವ ರಸ್ತೆಗೆ ಕಾವೇರಿ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ ಕಾಮಗಾರಿಯು ಪೂರ್ಣಗೊಂಡಿರದ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

5. ಶ್ರೀ ಮುನಿರತ್ನ ಅವರು ಬೆಂಗಳೂರಿನ ಸದಾಶಿವನಗರದ 16ನೇ ಅಡ್ಡರಸ್ತೆಯಲ್ಲಿರುವ ಬೃಂದಾವನ ದೇವಸ್ಥಾನಕ್ಕೆ ಭಕ್ತಾದಿಗಳ ಪ್ರವೇಶವನ್ನು ನಿರ್ಬಂಧಿಸಿರುವ ಹಾಗೂ ಸದರಿ ದೇವಸ್ಥಾನವನ್ನು ಮುಜರಾಯಿ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

6. ಶ್ರೀ ಹೆಚ್.ಕೆ. ಕುಮಾರಸ್ವಾಮಿ ಅವರು ರಾಷ್ಟ್ರೀಯ ಹೆದ್ದಾರಿ-75 ರಸ್ತೆಯನ್ನು ನಾಲ್ಕು ಪಥ ರಸ್ತೆಯನ್ನಾಗಿ ಪರಿವರ್ತಿಸಲು ಮತ್ತು ಸಕಲೇಶಪುರ ಪಟ್ಟಣ ವ್ಯಾಪ್ತಿಯಲ್ಲಿ ಬೈಪಾಸ್ ರಸ್ತೆ ಮಂಜೂರಾಗಿದ್ದರೂ ಕಾಮಗಾರಿ ವಿಳಂಬವಾಗುತ್ತಿರುವುದರಿಂದ ಸಂಚಾರಕ್ಕೆ ತೊಂದರೆಯಾಗಿರುವ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

7. ಶ್ರೀಮತಿ ಶಶಿಕಲಾ ಅಣ್ಣಾಸಾಹೇಬ ಜೊಲ್ಲೆ ಅವರು ರಾಜ್ಯದಲ್ಲಿ ಕಳೆದ ನಾಲ್ಕು ತಿಂಗಳಲ್ಲಿ ಹದಿಹರೆಯದ ಹೆಣ್ಣು ಮಕ್ಕಳ ನಾಪತ್ತೆ ಪ್ರಕರಣಗಳು ಹೆಚ್ಚಾಗಿರುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

8. ಶ್ರೀ ಶಿವಾನಂದ ಎಸ್. ಪಾಟೀಲ್ ಅವರು ಕೇಂದ್ರ ಸರ್ಕಾರ ನಿರ್ಮಲ ಭಾರತ ಅಭಿಯಾನ ಯೋಜನೆಯಡಿ ಗ್ರಾಮ ಪಂಚಾಯತಿಗಳಲ್ಲಿ ಶೌಚಾಲಯ ನಿರ್ಮಾಣಕ್ಕೆ ನೀಡಿರುವ ಧನ ಸಹಾಯದಲ್ಲಿ ಗ್ರಾಮೀಣ ಭಾಗದಲ್ಲಿ ಅವ್ಯವಹಾರ ನಡೆದಿರುವ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

9. ಶ್ರೀ ಎಸ್.ಟಿ. ಸೋಮಶೇಖರ ಅವರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಗೆ ಹೊಸದಾಗಿ ಸೇರ್ಪಡೆಯಾಗಿರುವ ವಾರ್ಡ್ ಸಂಖ್ಯೆ-40 ಹಾಗೂ 72ರ ಪ್ರದೇಶಗಳಿಗೆ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ವತಿಯಿಂದ ಕುಡಿಯುವ ನೀರು ಸರಬರಾಜು ಮಾಡುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

10. ಶ್ರೀ ಪ್ರಮೋದ್ ಮಧ್ವರಾಜ್ ಅವರು ರಾಜ್ಯ ಕೈಗಾರಿಕೆ ತರಬೇತಿ ಸಂಸ್ಥೆಗಳ ಅಭಿವೃದ್ಧಿ ಸಮಿತಿಗಳ ರಚನೆ ಬಗ್ಗೆ ಮಾನ್ಯ ಕಾರ್ಮಿಕ ಸಚಿವರ ಗಮನ ಸೆಳೆಯುವುದು.

**ಮು.ತಿ.ನೋ.,**

11. ಶ್ರೀ ಹೆಚ್.ಸಿ. ಬಾಲಕೃಷ್ಣ ಅವರು ಬರಪರಿಹಾರ ಯೋಜನೆಯಡಿಯಲ್ಲಿ ಕುಡಿಯುವ ನೀರಿನ ಕಾಮಗಾರಿಗಳಿಗೆ ಪೂರ್ಣ ಹಣ ಬಿಡುಗಡೆಯಾಗದೆ ಕಾಮಗಾರಿ ನಿರ್ವಹಿಸಿದ ಗುತ್ತಿಗೆದಾರರಿಗೆ ತೊಂದರೆಯಾಗಿರುವ ಬಗ್ಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

12. ಶ್ರೀ ಜಿ.ಹೆಚ್. ಶ್ರೀನಿವಾಸ ಅವರು ರಾಜ್ಯದಲ್ಲಿ ಆರ್.ಟಿ.ಓ, ಎ.ಆರ್.ಟಿ.ಓ ಮೋಟಾರು ವಾಹನ ತನಿಖಾಧಿಕಾರಿಗಳ ಹುದ್ದೆ ಭರ್ತಿ ಮಾಡುವ ಮತ್ತು ಎ.ಆರ್.ಟಿ.ಓ ಕಛೇರಿಗಳನ್ನು ತೆರೆಯುವ ಬಗ್ಗೆ ಮಾನ್ಯ ಸಾರಿಗೆ ಸಚಿವರ ಗಮನ ಸೆಳೆಯುವುದು.

13. ಶ್ರೀ ಮಾನಪ್ಪ ಡಿ. ವಜ್ಜಲ್ ಅವರು ರಾಯಚೂರು ಜಿಲ್ಲೆ ಲಿಂಗಸಗೂರು ತಾಲ್ಲೂಕಿನ ಗೋನವಾಟ್ಲ ತಾಂಡಾದಲ್ಲಿ ದಿನಾಂಕ: 15.06.2014ರಂದು ಒಂದು ಹೆಣ್ಣು ಮಗುವಿನ ಮೇಲೆ ಅತ್ಯಾಚಾರ ನಡೆದಿರುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

14. ಶ್ರೀ ಎಲ್.ಎ. ರವಿ ಸುಬ್ರಮಣ್ಯ ಅವರು ಬೆಂಗಳೂರು ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಸಂಜೆ ಇಂಜಿನಿಯರಿಂಗ್ ಕಾಲೇಜುಗಳನ್ನು ಸ್ಥಾಪಿಸುವ ಬಗ್ಗೆ ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಗಮನ ಸೆಳೆಯುವುದು.

15. ಶ್ರೀ ಎಸ್. ಚಿಕ್ಕಮಾದು ಅವರು ಅನ್ನಭಾಗ್ಯ ಯೋಜನೆಗೆ ಆಹಾರ ಪಡಿತರಗಳನ್ನು ಭಾರತ ಆಹಾರ ನಿಗಮದ ಗೋದಾಮುಗಳಿಂದ ನೇರವಾಗಿ ಪಡಿತರ ವಿತರಕರ ಅಂಗಡಿಗಳಿಗೆ ಸರಬರಾಜು ಮಾಡುತ್ತಿರುವುದರಿಂದ ಹಮಾಲಿಗಳಿಗೆ ಕೆಲಸವಿಲ್ಲದೆ ತೊಂದರೆಯಾಗುತ್ತಿರುವ ಬಗ್ಗೆ ಆಹಾರ ಮತ್ತು ನಾಗರೀಕರ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರ ಗಮನ ಸೆಳೆಯುವುದು.

16. ಶ್ರೀ ಎ.ಬಿ.ರಮೇಶ್ ಬಂಡಿಸಿದ್ದೇಗೌಡ ಅವರು ಶ್ರೀರಂಗಪಟ್ಟಣ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಪ್ರತ್ಯೇಕವಾಗಿ ವಿದ್ಯುತ್ ಪರಿವರ್ತಕಗಳ ರಿಪೇರಿ ಕೇಂದ್ರ ತೆರೆಯುವ ಬಗ್ಗೆ ಮಾನ್ಯ ಇಂಧನ ಸಚಿವರ ಗಮನ ಸೆಳೆಯುವುದು.

17. ಶ್ರೀ ಎನ್. ಚಲುವರಾಯಸ್ವಾಮಿ ಅವರು ಕಾವೇರಿ ನ್ಯಾಯಮಂಡಳಿ ಐತೀರ್ಪಿನ ವಿರುಧ್ಧ ಕಾವೇರಿ ನದಿ ನೀರಿನ ರಕ್ಷಣೆಯ ಬಗ್ಗೆ ಪ್ರತಿಭಟನೆ ಮಾಡಿದವರ ಮೇಲೆ ದಾಖಲಿಸಿರುವ ಮೊಕದ್ದಮೆಗಳನ್ನು ಹಿಂಪಡೆಯುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

18. ಶ್ರೀ ಆರ್. ನರೇಂದ್ರ ಅವರು ಕರ್ನಾಟಕದಲ್ಲಿ ವಾಸ ಮಾಡುತ್ತಿರುವ ಸೋಲಿಗ ಜನಾಂಗ(ಗಿರಿಜನರು) ಇವರನ್ನು ಮೂಲ ನಿವಾಸಿಗಳ ಗುಂಪಿಗೆ ಸೇರಿಸುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

19. ಶ್ರೀ ಕೆ.ಬಿ. ಕೋಳಿವಾಡ್ ಅವರು ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕಿನ ನಲವಾಗಿಲು ಗ್ರಾಮವನ್ನು ಸ್ಥಳಾಂತರಿಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

**ಪು.ತಿ.ನೋ.,**

20. ಶ್ರೀ ತನ್ವೀರ್ ಸೇಠ್ ಅವರು ರಾಜ್ಯದ ಪ್ರತಿ ಜಿಲ್ಲೆಯಲ್ಲಿ ವಿಜ್ಞಾನ ಕೇಂದ್ರವನ್ನು ಸ್ಥಾಪನೆ ಮಾಡುವ ಬಗ್ಗೆ ಮಾನ್ಯ ಯೋಜನೆ ಮತ್ತು ಸಾಂಖ್ಯಿಕ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರ ಗಮನ ಸೆಳೆಯುವುದು.

21. ಶ್ರೀ ಎಂ.ಟಿ. ಕೃಷ್ಣಪ್ಪ ಅವರು ತುರುವೇಕೆರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಆನೆಕೆರೆ ಗ್ರಾಮ, ಮಲ್ಲಘಟ್ಟ ಕೆರೆ ಮೀನುಗಾರರ ಹೈನುಗಾರಿಕೆಗೆ ಸಹಕಾರಿ ನಿಯಮ 64ರ ಅಡಿ ಸೂಪರ್‌ಸೀಡ್ ಮಾಡಲು ಹಾಗೂ ಅತ್ಯಂತ ಭ್ರಷ್ಟ ಕಾರ್ಯದರ್ಶಿಯನ್ನು ಸಸ್ಪೆಂಡ್ ಮಾಡುವ ಬಗ್ಗೆ ಮಾನ್ಯ ಸಹಕಾರ ಮತ್ತು ಸಕ್ಕರೆ ಸಚಿವರ ಗಮನ ಸೆಳೆಯುವುದು.

22. ಶ್ರೀ ಕೆ.ಎಂ. ಶಿವಲಿಂಗೇಗೌಡ ಅವರು ಪ್ರಾಥಮಿಕ ಶಾಲೆಯಿಂದ ಪ್ರೌಢಶಾಲೆಗೆ ಬಡ್ತಿ ಹೊಂದಿದ ಸಹ ಶಿಕ್ಷಕರುಗಳ ವೇತನದಲ್ಲಿ ಆಗುತ್ತಿರುವ ತಾರತಮ್ಯದ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಗಮನ ಸೆಳೆಯುವುದು.

23.ಶ್ರೀ ಕೆ. ಶಿವಮೂರ್ತಿ ಅವರು ಮಾಯಕೊಂಡ ಕ್ಷೇತ್ರಕ್ಕೆ ಒಳಪಡುವ ಗ್ರಾಮ ಮತ್ತು ಉಪ ಗ್ರಾಮಗಳಿಗೆ ಮಂಜೂರಾತಿಯಾಗಿರುವ ಬಸ್‌ಗಳ ರೂಟ್‌ಗಳು ಉದ್ಘಾಟನೆಯಾಗಿದ್ದರೂ ಬಸ್‌ಗಳನ್ನು ನಿಲ್ಲಿಸಿರುವುದರಿಂದ ಆಗಿರುವ ಅನಾನುಕೂಲಗಳ ಬಗ್ಗೆ ಮಾನ್ಯ ಸಾರಿಗೆ ಸಚಿವರ ಗಮನ ಸೆಳೆಯುವುದು.

24. ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ ಅವರು ಬಿಜಾಪುರ ಜಿಲ್ಲೆಯ ಇಂಡಿ ಪಟ್ಟಣದ ಜನತೆಗೆ ಕುಡಿಯುವ ನೀರು ಪೂರೈಸುತ್ತಿದ್ದ ಬರಗುಡಿ ಗ್ರಾಮದ ಬಳಿ ಇರುವ ಜಾಕ್ವೆಲ್‌ನಲ್ಲಿ ನೀರು ಸಂಪೂರ್ಣವಾಗಿ ಖಾಲಿಯಾಗಿರುವುದರಿಂದ ಮಹಾರಾಷ್ಟ್ರದ ಉಜನಿ ಡ್ಯಾಂನಿಂದ ಬರಗುಡಿ ಜಾಕ್ವೆಲ್‌ನಲ್ಲಿ ನೀರು ಸಂಗ್ರಹಣೆ ಮಾಡುವ ಬಗ್ಗೆ ಮಾನ್ಯ ಭಾರಿ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

25. ಶ್ರೀ ಸಿ.ಟಿ. ರವಿ ಅವರು ಚಿಕ್ಕಮಗಳೂರು ವಿಧಾನಸಭಾ ಕ್ಷೇತ್ರದ ಆಲ್ದೂರಿನಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು ಮಂಜೂರಾಗಿದ್ದು ಅಗತ್ಯ ಭೂಮಿಯನ್ನು ನೀಡಿದ್ದರೂ ಪಾಲಿಟೆಕ್ನಿಕ್ ಕಾಲೇಜು ಪ್ರಾರಂಭಿಸದೇ ವಿದ್ಯಾರ್ಥಿಗಳಿಗೆ ಅನಾನುಕೂಲವಾಗಿರುವ ಬಗ್ಗೆ ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಗಮನ ಸೆಳೆಯುವುದು.

## 6. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. ಶ್ರೀಯುತರುಗಳಾದ ಡಾ|| ಕೆ.ಸುಧಾಕರ, ಎಸ್.ಎನ್. ನಾರಾಯಣಸ್ವಾಮಿ, ಎಸ್.ಎನ್. ಸುಬ್ಬಾರೆಡ್ಡಿ ಅವರುಗಳು ಚಿಕ್ಕಬಳ್ಳಾಪುರ ಜಿಲ್ಲೆ ನಂದಿ ಹೋಬಳಿಯ ನೆಲಮಾಕಲಹಳ್ಳಿ ಗ್ರಾಮದ ಸರ್ವೆ ನಂ. 24ರಲ್ಲಿನ 84 ಎಕರೆ 1 ಗುಂಟೆ ಜಮೀನಿನಲ್ಲಿ ನಿರ್ಮಿಸಲು ಉದ್ದೇಶಿಸಿದ್ದ ಟೆಕ್ಸ್‌ಟೈಲ್ ಪಾರ್ಕ್‌ಗೆ ನೀಡಿದ್ದ ಜಮೀನನ್ನು ಕೃಷಿ ಇಲಾಖೆ ಹಿಂಪಡೆದಿರುವ ಬಗ್ಗೆ ಚರ್ಚೆ.

ಮು.ತಿ.ನೋ.,

2. ಶ್ರೀಯುತರುಗಳಾದ ಹೆಚ್.ಡಿ. ರೇವಣ್ಣ, ವೈ.ಎಸ್.ವಿ. ದತ್ತ, ಕೆ.ಎಂ.ಶಿವಲಿಂಗೇಗೌಡ, ಸಿ.ಎನ್. ಬಾಲಕೃಷ್ಣ ಮತ್ತು ಕೆ. ಷಡಾಕ್ಷರಿ ಅವರುಗಳು ಹಾಸನ-ದುದ್ದ-ತಿಪಟೂರು-ಚಿಕ್ಕನಾಯಕನ ಹಳ್ಳಿ ರಸ್ತೆ ಅಭಿವೃದ್ಧಿ ಕಾಮಗಾರಿ ಪೂರ್ಣಗೊಳ್ಳದಿರುವುದರಿಂದ ಉಂಟಾಗಿರುವ ತೊಂದರೆಗಳ ಬಗ್ಗೆ ಚರ್ಚೆ.

**ಪಿ.ಓಂಪ್ರಕಾಶ**
ಕಾರ್ಯದರ್ಶಿ

Raj N

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.
(www.kar.nic.in/kla)